


# ಹೊಂಗನಸು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ



ಸಂಪುಟ: ೦೩ ಸಂಚಿಕೆ: ೬ Vol. 03 Issue 6 | ಸೆಪ್ಟೆಂಬರ ೨೦೧೬ August 2016 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/- A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath


# ಖ್ಯಾತ ನಿರ್ದೇಶಕ ಶ್ರೀ ರಾಜೇಂದ್ರಸಿಂಗ್ ಬಾಬು ನಿರ್ದೇಶಿಸಿರುವ ತ್ರಿವೇಣಿ ಅವರ ಕಾದಂಬರಿ ಆಧಾರಿತ "ಹೂವು- ಹಣ್ಣು" ಚಲನಚಿತ್ರ

ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಹಮ್ಮಿ ಕೊಂಡಿದ್ದ ಸಾಹಿತ್ಯಾಧಾರಿತ ಚಲನಚಿತ್ರಗಳ ಪ್ರದರ್ಶನ ಹಾಗೂ ಚರ್ಚೆಯ ಮೂರನೆಯ ಕಂತು ಕೃತಿ ಚಿತ್ರ 3ರಲ್ಲಿ ಖ್ಯಾತ ನಿರ್ದೇಶಕಶ್ರೀ ರಾಜೇಂದ್ರಸಿಂಗ್ ಬಾಬು ನಿರ್ದೇಶಿಸಿರುವ ತ್ರಿವೇಣಿ ಅವರ ಕಾದಂಬರಿ ಆಧಾರಿತ "ಹೂವು- ಹಣ್ಣು" ಚಲನಚಿತ್ರವನ್ನು ಪ್ರದರ್ಶಿಸಲಾಯಿತು. ಮೊದಲಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿ.ವಿ. ನಾರಾಯಣ ಅವರು ಸ್ವಾಗತ ಕೋರಿದರು.ಪತ್ರಕರ್ತ ಶ್ರೀ ಎನ್.ಎಸ್. ಶ್ರೀಧರಮೂರ್ತಿ ಪ್ರಾಸ್ತಾವಿಕ ನುಡಿಗಳನ್ನು ಆಡಿ ಈ ಮಾಲಿಕೆಯ ಆಶಯವನ್ನು ವಿವರಿಸಿಅತಿಥಿಗಳ ಪರಿಚಯ ಮಾಡಿಕೊಟ್ಟರು.ಈ ಚಲನಚಿತ್ರದ ನಿರ್ದೇಶಕರಾದ ಶ್ರೀ ರಾಜೇಂದ್ರಸಿಂಗ್ ಬಾಬು, ಅಧ್ಯಕ್ಷರು ಕರ್ನಾಟಕ ಚಲನಚಿತ್ರ ಅಕಾಡೆಮಿಅವರು ಈ ಚಲನಚಿತ್ರದ ಬಗ್ಗೆ, ಹಾಗೂ ತಮ್ಮ ಚಲನ ಚಿತ್ರ ನಿರ್ದೇಶನ ಹಾಗೂ ನಿರ್ಮಾಣಗಳಿಗೆ ಸಂಬಂಧಿಸಿದಂತೆ ತಮ್ಮ ಅನುಭವಗಳು ಹಾಗೂ ಕನ್ನಡ ಚಿತ್ರ ರಂಗದ ಬಗ್ಗೆ ಹಲವು ವಿಚಾರಗಳನ್ನು ವಿವರಿಸಿದರು. ವಿಶೇಷವಾಗಿ ಕನ್ನಡ ಚಲನ ಚಿತ್ರಗಳಿಗೆ ಮಾರುಕಟ್ಟೆ ಕಡಿಮೆಯಾಗುತ್ತಿದ್ದು ಇತರ ಭಾಷೆಗಳು ಪ್ರತಿ ವರ್ಷ ಗಳಿಸುವ ಸುಮಾರು ರೂ.2000 ಕೋಟಿಗಳಷ್ಟು ಹಣ ಬೇರೆ ರಾಜ್ಯಗಳಿಗೆ ರವಾನೆಯಾಗುತ್ತಿದೆ ಎಂದು ತಿಳಿಸಿ ಈ ಬಗ್ಗೆ ಜರೂರಾಗಿ ಕೆಲವು ಕ್ರಮಗಳನ್ನು ಕೈಗೊಳ್ಳಬೇಕಾಗಿದೆ ಎಂದು ತಿಳಿಸಿದರು. ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ವಂದನಾರ್ಪಣೆ ಮಾಡಿದರು. ನಂತರ ನಡೆದ ಸಂವಾದ ಕಾರ್ಯಕ್ರಮದಲ್ಲಿ ಪ್ರಸಿದ್ಧ ಸಾಹಿತಿ ಶ್ರೀಮತಿ ನಾಗಮಣಿ ಎಸ್. ರಾವ್ ಅವರು ಚಲನ ಚಿತ್ರದ ಬಗ್ಗೆ ತಮ್ಮ ಅನಿಸಿಕೆಗಳನ್ನು ತಿಳಿಸಿ ಈ ಚಿತ್ರವು ನೋಡುಗರನ್ನು ತ್ರಿವೇಣಿ ಅವರು ಕಲ್ಪನೆ ಮಾಡಿಕೊಂಡಿದ್ದ ಕಾಲಘಟ್ಟಕ್ಕೆ ಕರೆದೊಯ್ಯುತ್ತದೆ ಎಂದು ಅಭಿಪ್ರಾಯಪಟ್ಟರು.




ಪ್ರತಿ ತಿಂಗಳ ಎರಡನೇ ಭಾನುವಾರ ಒಂದು ಚಲನಚಿತ್ರವನ್ನು ಪ್ರದರ್ಶಿಸಲಾಗುತ್ತದೆ. ಚಲನಚಿತ್ರದ ಪ್ರದರ್ಶನದ ನಂತರ ನಡೆದ ಸಂವಾದದಲ್ಲಿ ಹಲವಾರು ಸದಸ್ಯರು ಹಾಗೂ ಪ್ರೇಕ್ಷಕರು ಭಾಗವಹಿಸಿದ್ದರು. ಕಾರ್ಯಕ್ರಮವು ಭೋಜನದೊಂದಿಗೆ ಮುಕ್ತಾಯವಾಯಿತು.




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/-

ಐದು ವರ್ಷಗಳ ಚಂದಾ
ರೂ. ೧೦೦/-



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೮೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

## ಸಂಪಾದಕೀಯ

ಮಾಹಿತಿ ತಂತ್ರಜ್ಞಾನ ಕ್ಷೇತ್ರಕ್ಕೆ ಬೆಂಗಳೂರು ಹಾಗೂ ಕನ್ನಡಿಗರು ಸಲ್ಲಿಸಿರುವ ಸೇವೆ ಅಪಾರ. ಮಾಹಿತಿ ತಂತ್ರಜ್ಞಾನ ಕಂಪೆನಿಗಳು ಸುಗಮವಾಗಿ ವಹಿವಾಟುಗಳನ್ನು ನಡೆಸಲು ಲಾಗಾಯ್ತಿನಿಂದಲೂ ನಮ್ಮ ಸರ್ಕಾರ ಹಲವಾರು ಸವಲತ್ತುಗಳನ್ನು ನೀಡಿ ಪ್ರೋತ್ಸಾಹಿಸುತ್ತಾ ಬಂದಿದೆ. ಈ ಕ್ಷೇತ್ರವು ಉಚ್ಛ್ರಾಯ ಸ್ಥಿತಿ ತಲುಪಲು ನಮ್ಮ ನಿಮ್ಮೆಲ್ಲರ ಭಾಗವಹಿಕೆಯೂ ಇದೆ. ಸ್ವಾಭಾವಿಕವಾಗಿ ಈ ಎಲ್ಲ ಕಂಪೆನಿಗಳು ನಮ್ಮ ನಾಡು, ನೆಲ ಜಲ, ನುಡಿ, ಉದ್ಯೋಗ ಹಾಗೂ ಸಂಸ್ಕೃತಿಗಳಿಗೆ ಬೆಂಬಲ ನೀಡಿ ಕರ್ನಾಟಕದ ಒಟ್ಟಾರೆ ಅಭಿವೃದ್ಧಿಗೆ ಕಾರಣವಾಗಬೇಕಿತ್ತು. ಆದರೆ ಹಾಗೆ ಆಗದೆ ವ್ಯತಿರಿಕ್ತವಾಗಿ ಕನ್ನಡ ಭಾಷೆ ತಾಂತ್ರಿಕವಾಗಿಯೂ ಬೆಳೆಯಲು ಬೆಂಬಲ ನೀಡದೆ, ಸ್ಥಳೀಯರಿಗೆ ಕೆಲಸಗಳನ್ನು ನಿರಾಕರಿಸಿದ್ದಲ್ಲದೇ ತಮ್ಮ ಸ್ವಂತ ಪ್ರಯತ್ನಗಳ ಮೂಲಕ ಕನ್ನಡ ಭಾಷೆಯ ಅಭಿವೃದ್ದಿಗೆ ಪ್ರಯತ್ನಿಸುತ್ತಿರುವ ಉತ್ಸಾಹಿಗಳಿಗೆ ಅಡ್ಡಿಯುಂಟು ಮಾಡುತ್ತಿರುವುದು ಖೇದಕರವಾಗಿದೆ. ಪ್ರಸಿದ್ಧ ಸಾಹಿತಿ ಪ್ರಕಾಶಕ ಶ್ರೀಯುತ ವಸುಧೇಂದ್ರ ಅವರ, ಕಿಂಡಲ್ ಮೂಲಕ ತಮ್ಮ ಕನ್ನಡ ಪುಸ್ತಕವನ್ನು ಮಾರಾಟ ಮಾಡುವ ಪ್ರಯತ್ನಕ್ಕೆ ಅಡ್ಡಿಪಡಿಸಿರುವುದು ಅಮೇಜಾನ್ ಕಂಪೆನಿಯ ಅಸಹಕಾರಿ ಧೋರಣೆಯನ್ನು ಸೂಚಿಸುತ್ತದೆ. ಈ ಬಗ್ಗೆ ನಾವೆಲ್ಲರೂ ಚಿಂತನೆ ಮಾಡಬೇಕಿದೆ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

### ಸೆಪ್ಟೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ತ್ರಿವೇಣಿ | 1–9–1928 |
| ಕೆ.ಪಿ. ಪೂರ್ಣಚಂದ್ರ ತೇಜಸ್ವಿ | 8–9–1938 |
| ದಿನಕರ ದೇಸಾಯಿ | 10–9–1909 |
| ಶ್ರೀರಂಗ | 26–9–1904 |
| ನಿರುಪಮಾ | 30–09–1931 |

### ಸೆಪ್ಟೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಸಿದ್ದಯ್ಯ ಪುರಾಣಿಕ | 5–9–1994 |
| ಎಂ. ಗೋವಿಂದಪೈ | 6–9–1963 |
| ತೀನಂ ಶ್ರೀಕಂಠಯ್ಯ | 7–9–1966 |
| ಎಂ.ಆರ್. ಶ್ರೀನಿವಾಸ ಮೂರ್ತಿ | 16–9–1953 |
| ತಿರುಮಲೆ ರಾಜಮ್ಮ | 24–9–1984 |
| ಶಂಭಾಜೋಷಿ | 28–9–1991 |
| ಗೊರೂರು ರಾಮಸ್ವಾಮಿ ಅಯ್ಯಂಗಾರ್ | 28–9–1991 |

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಕುಲಮದವಿರದತ್ತ
ಧನಮದವಿರದತ್ತ
ಅಧಿಕಾರ ಮದವಿರದತ್ತ
ಜಾತಿ ಜಗಳವಿರದತ್ತ
ಅನಾಚಾರಿಗಳಿರದತ್ತ
ಭ್ರಷ್ಟಾಚಾರಿಗಳರದತ್ತ
ಅಧರ್ಮಿಗಳಿರದತ್ತ
ರಾಜಕೀಯ ಡೊಂಬರಾಟವಿರದತ್ತ
ನನ್ನ ಕರೆದೊಯ್ಯೊ 'ಅಲ್ಲಾರಖಾ'
ನಿನ್ನ ಸೆರಗೊಡ್ಡಿ ಬೇಡುವೆ. ||11||

## ಕಾರ್ಯಕಾರಿ ಸಮಿತಿ ಸಭೆ – 8ನೇ ಆಗಸ್ಟ್ 2016

### 8ನೇ ಆಗಸ್ಟ್ 2016 ರಂದು ನಡೆದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ನಡೆದ ಕಲಾಪಗಳು

ದಿನಾಂಕ 3ನೇ ಜುಲೈ 2016 ರಂದು ನಡೆದ ಸರ್ವ ಸದಸ್ಯರ ವಿಶೇಷ ಸಭೆಯಲ್ಲಿ ಮಾಡಲಾದ ತಿದ್ದುಪಡಿಗಳು ವಿಧ್ಯುಕ್ತವಾಗಿ ಅಂಗೀಕೃತವಾಗಿದ್ದು ಅಂದಿನ ದಿನದಿಂದ ಚಾಲನೆಗೆ ಬಂದಿರುತ್ತದೆ.

2014ರಿಂದ ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದ ಡಾ.ಕೆ ಆರ್ ಗಣೇಶ್ ಅವರ ರಾಜೀನಾಮೆಯಿಂದ ತೆರವಾದ ಸ್ಥಾನಕ್ಕೆ ಬಾಕಿ ಉಳಿದ ಅವಧಿಗಾಗಿ ಶ್ರೀ ಬಿ.ಎಸ್. ಗುರುಪ್ರಸಾದ್ ಅವರನ್ನು ಕೋಆಪ್ಟ್ ಮಾಡಲಾಯಿತು.ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಅವರ ಅವಧಿ ಒಂದು ವರ್ಷ.2017ರಲ್ಲಿ ನಿವೃತ್ತರಾಗುತ್ತಾರೆ.

ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದ ಶ್ರೀ ಎಂ. ಎಸ್. ರಾಮಪ್ರಸಾದ್ ಅವರು ನಿವೃತ್ತಿ ಹೊಂದಿದ ನಂತರ ತೆರವಾಗಿದ್ದ ಕೋಶಾಧಿಕಾರಿ ಸ್ಥಾನದಲ್ಲಿ ಡಾ|| ಎಸ್. ಅನಿಲ್ ಕುಮಾರ್ ಅವರನ್ನು 2016 ರಿಂದ 2019 ಅವಧಿಗೆ ಆಯ್ಕೆ ಮಾಡಲಾಯಿತು.

ಈ ವರೆಗೆ ಆಂತರಿಕ ಲೆಕ್ಕ ಪರಿಶೋಧಕರಾಗಿದ್ದ ಡಾ|| ಎಸ್. ಅನಿಲ್ ಕುಮಾರ್ ಅವರನ್ನು ಕೋಶಾಧಿಕಾರಿಯಾಗಿ ಆಯ್ಕೆ ಮಾಡಿದ ಕಾರಣದಿಂದ ತೆರವಾಗಿದ್ದ ಸ್ಥಾನದಲ್ಲಿ ಶ್ರೀ ಶ್ರೀನಿವಾಸಮೂರ್ತಿ ಅವರನ್ನು ಆಯ್ಕೆ ಮಾಡಲಾಯಿತು. ಅವರು 2016ರಿಂದ 2019ರ ವರೆಗೆ ಸೇವೆ ಸಲ್ಲಿಸುತ್ತಾರೆ.

## ಅಭಿನಂದನೆಗಳು

### ನೂತನ ಕೋಶಾಧಿಕಾರಿ ಡಾ|| ಎಸ್. ಅನಿಲ್ ಕುಮಾರ್

ಡಾ|| ಎಸ್. ಅನಿಲ್ ಕುಮಾರ್ ಅವರು ಪ್ರಸ್ತುತ ಸಿಂಧಿ ವಾಣಿಜ್ಯ ಕಾಲೇಜಿನಲ್ಲಿ ಉಪ–ಪ್ರಾಂಶುಪಾಲರು. ಹಾಗೂ ಉದಯಭಾನು ಕಲಾ ಸಂಘದ, ಕಾರ್ಯಕಾರಿ ಸಮಿತಿ ಸದಸ್ಯರಾಗಿರುತ್ತಾರೆ. ಅವರು ಅರ್ಥ ಶಾಸ್ತ್ರದಲ್ಲಿ ಪಿಹೆಚ್ ಡಿ ಪದವಿಯನ್ನು ಗಳಿಸಿದ್ದಾರೆ. ಕಳೆದ 3 ವರ್ಷಗಳ ಕಾಲ ಅವರು ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕರಾಗಿ ಸೇವೆ ಸಲ್ಲಿಸಿರುತ್ತಾರೆ.

* * *



### ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ನೂತನ ಕಾರ್ಯಕಾರಿ ಸಮಿತಿ ಸದಸ್ಯ

### ಶ್ರೀ ಬಿ.ಎಸ್. ಗುರುಪ್ರಸಾದ್

ವಿದ್ಯಾಭ್ಯಾಸ : ಬಿ.ಎಸ್ಸಿ, ಬಿ.ಕಾಂ. , ಶಾಸನ ಶಾಸ್ತ್ರದಲ್ಲಿ ಡಿಪ್ಲೊಮಾ, ಭಾರತೀಯ ಜೀವ ಬಿಮಾ ನಿಗಮದಲ್ಲಿ ಆಡಳಿತಾಧಿಕಾರಿಯಾಗಿ ನಿವೃತ್ತಿ ಹೊಂದಿದ್ದು ಪ್ರಸ್ತುತ ಜೀವ ಬಿಮಾ ನಿಗಮದಲ್ಲಿ ಪ್ರತಿನಿಧಿಯಾಗಿರುತ್ತಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ 3 ವರ್ಷಗಳಿಂದ ಹಸ್ತಪ್ರತಿ ಸಂರಕ್ಷಣಾ ಕಾರ್ಯದಲ್ಲಿ ತೊಡಗಿಸಿಕೊಂಡಿರುತ್ತಾರೆ. ಕರ್ನಾಟಕ ಇತಿಹಾಸ ಅಕಾಡೆಮಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುತ್ತಾರೆ. ಜೊತೆಗೆ ಚಾರಣ, ಪಕ್ಷಿವೀಕ್ಷಣೆ, ಛಾಯಾಗ್ರಹಣ ಚಟುವಟಿಕೆಗಳಲ್ಲದೇ ಹಲವಾರು ಸಂಘಸಂಸ್ಥೆಗಳ ಜೊತೆ ಒಡನಾಟ ಹೊಂದಿರುತ್ತಾರೆ.

* * *

### ನೂತನ ಆಂತರಿಕ ಲೆಕ್ಕ ಪರಿಶೋಧಕರು

### ಶ್ರೀ ಶ್ರೀನಿವಾಸಮೂರ್ತಿ

ಕೆನರಾಬ್ಯಾಂಕಿನಲ್ಲಿ 37 ವರ್ಷಗಳ ಕಾಲ ಸೇವೆ ಸಲ್ಲಿಸಿರುವ ಇವರು ಈ ಹಿಂದೆ ಸುಚಿತ್ರ ಫಿಲ್ಮ್ ಸೊಸೈಟಿಯಲ್ಲಿ 4 ವರ್ಷಗಳ ಕಾಲ ಖಜಾಂಚಿಯಾಗಿ, ಶೃಂಗೇರಿ ಜೆ.ಸಿ.ಬಿ.ಎಮ್. ಕಾಲೇಜು ಹಿರಿಯ ವಿದ್ಯಾರ್ಥಿ ಸಂಘದಲ್ಲಿ 4 ವರ್ಷಗಳ ಕಾಲ ಅಧ್ಯಕ್ಷನಾಗಿ ಕೆಲಸ ಮಾಡಿದ್ದು ಈಗಲೂ ಸಹ ಅಲ್ಲಿಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.



# ಸೆಪ್ಟೆಂಬರ್ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**2–9–2016 ಶುಕ್ರವಾರ ಸಂಜೆ 6:00ಗಂಟೆ**

**ಕನ್ನಡ ಸಂಸ್ಕೃತಿ ದರ್ಶನ**

(ಸಾಕ್ಷ್ಯ ಚಿತ್ರಗಳ ಪ್ರದರ್ಶನ)

**7–9–2016 ಬುಧವಾರ ಸಂಜೆ 6:00 ಗಂಟೆ**



**ಗಮಕವಾಹಿನಿ–8**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮ

ಪ್ರಸಂಗ : ರಾಘವಾಂಕದ ಹರಿಶ್ಚಂದ್ರ ಕಾವ್ಯದಿಂದ: – "ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು"

ನಡೆಸಿಕೊಡುವವರು : ಲಾಸ್ಯ, ಆಶ್ರಿತಾ, ಭವಾನಿ, ಶ್ರೇಯಾ ಎಸ್.ರಾವ್, ಅಂಭೃಣಿ, ಆದಿತ್ಯ, ಸರ್ಜನಿಯಾರಾಂ ಮತ್ತು ಚಿನ್ಮಯ

ನೇತೃತ್ವ : ಶ್ರೀಮತಿ ಸಿ.ವಿ. ಶ್ರೀಮತಿ



**09–09–2016 ಶುಕ್ರವಾರ ಸಂಜೆ 6 ಗಂಟೆಗೆ**

**ಶ್ರೀಮತಿ ಸಾವಿತ್ರಮ್ಮ–ಪ್ರೊ.ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ ಪ್ರದಾನ ಸಮಾರಂಭ**

ಪುರಸ್ಕಾರ ಪ್ರದಾನ–ಅಧ್ಯಕ್ಷತೆ– ಶ್ರೀ ಎನ್. ಚಂದ್ರಶೇಖರ್

ಉಪ ಮಹಾನಿರ್ದೇಶಕರು, ಬೆಂಗಳೂರು ದೂರದರ್ಶನ ಕೇಂದ್ರ

ಪುರಸ್ಕೃತರು : ಶ್ರೀ ವಿ. ಕೃಷ್ಣ

ಅಭಿನಂದನಾ ನುಡಿಗಳು : ಡಾ॥ ಶ್ರೀಪಾದ ಭಟ್, ಸಹಾಯಕ ಪ್ರಾಧ್ಯಾಪಕರು, ಡಿ.ವಿ.ಜಿ. ಕನ್ನಡ ಅಧ್ಯಯನ ಕೇಂದ್ರ, ತುಮಕೂರು ವಿಶ್ವವಿದ್ಯಾನಿಲಯ

**11–09–2016 ಭಾನುವಾರ ಬೆಳಗ್ಗೆ 10.30 ಗಂಟೆಗೆ**




ಕೃತಿ–ಚಿತ್ರ –4

(ಸಾಹಿತ್ಯ ಕೃತಿ ಆಧಾರಿತ ಚಲನ ಚಿತ್ರ ಪ್ರದರ್ಶನ)

ಷೇಕ್ಸ್ ಪಿಯರ್‌ನ ಕಾಮಿಡಿ ಆಫ್ ಎರರ್ ಆಧಾರಿತ

**"ಉಲ್ಟಾ ಪಲ್ಟಾ"** ಚಲನ ಚಿತ್ರ ಪ್ರದರ್ಶನ

ಅತಿಥಿಗಳು : ನಿರ್ದೇಶಕರು–ಶ್ರೀ ಎನ್.ಎಸ್. ಶಂಕರ್.

ನಾಯಕ ನಟ : ಶ್ರೀ ರಮೇಶ್ ಅರವಿಂದ್

ಕಾರ್ಯಕ್ರಮ ಸಂಯೋಜಕರು : ಶ್ರೀ ಎನ್.ಎಸ್. ಶ್ರೀಧರಮೂರ್ತಿ

ಈ ಚಲನ ಚಿತ್ರದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಹಾಗೂ ಇತ್ತೀಚೆಗೆ ನಿಧನರಾದ ಶ್ರೀ ಸಂಕೇತ್ ಕಾಶಿ ಅವರ ನೆನಪಿನಲ್ಲಿ



**16–9–2016 ನೇ ಶುಕ್ರವಾರ ಸಂಜೆ 6–00ಗಂಟೆಗೆ**

**ಅಕ್ಕರಗೊಟ್ಟಿ**

(ತಿಂಗಳ ಮುಕ್ತ ಸಾಂಸ್ಕೃತಿಕಚಿಂತನೆ)

ವಿಷಯ : "ಕತಕ ಬೀಜ : ಒಂದು ಜಿಜ್ಞಾಸೆ"

ಚಾಲನೆ : ಪ್ರೊ॥ ಕೆ. ಎಸ್. ಮಧುಸೂದನ್

**24–9–2016 ಶನಿವಾರ ಸಂಜೆ : 6:00 ಗಂಟೆಗೆ**



**ರಂಗಸಂವಾದ**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ ಪ್ರದರ್ಶನ

**"ನಮ್ಮ ಊರು ಬೆಂಗಳೂರು"**

ನಿರ್ದೇಶನ :ಶ್ರೀ ವಿಜಯ್ ಎ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜುಲೈ 2016– ಆಗಸ್ಟ್ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ವಚನ ವಿಹಾರ ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ ಸಮಾರೋಪ ಕಾರ್ಯಕ್ರಮ ದಿನಾಂಕ 22–7–2016




ಕಳೆದ ಒಂದು ವರ್ಷದಿಂದ ನಡೆಸಿಕೊಂಡು ಬರುತ್ತಿದ್ದ ವಚನ ವಿಹಾರ ಸಂಗೀತಾತ್ಮಕ ಚಲನ ಚಿತ್ರಗಳ ಪ್ರದರ್ಶನ ಕಾರ್ಯಕ್ರಮ ಮಾಲೆಯಲ್ಲಿ 26 ಸಾಕ್ಷ್ಯ ಚಿತ್ರಗಳನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಪ್ರತಿ ತಿಂಗಳೂ ಪ್ರದರ್ಶಿಸಲಾಯಿತು. ಬಸವಣ್ಣನ ವಚನಗಳಿಂದ ಪ್ರಾರಂಭವಾಗಿ ಎಲ್ಲಾ ಪ್ರಮುಖ ವಚನಕಾರರು ರಚಿಸಿದ ವಚನಗಳ ಪೈಕಿ ಪ್ರಮುಖ ಜನಪ್ರಿಯ ವಚನಗಳ ಗಾಯನ ಹಾಗೂ ವ್ಯಾಖ್ಯಾನಗಳನ್ನು ಒಳಗೊಂಡಿದ್ದ ಈ ಸಾಕ್ಷ್ಯ ಚಿತ್ರಗಳು ಬಹಳಷ್ಟು ಅರಿವು ಮೂಡಿಸುವುದರ ಜೊತೆಗೆ ಉತ್ಕೃಷ್ಟ ಹಿನ್ನಲೆ ಸಂಗೀತದೊಂದಿಗೆ ಹಾಗೂ ಜನಪ್ರಿಯ ಗಾಯಕರು ಸುಶ್ರಾವ್ಯವಾಗಿ ಹಾಡಿದ ವಚನಗಳು ಸಭಿಕರನ್ನು ರಂಜಿಸಿದವು. ಈ ಹಿಂದೆ 1996ರಲ್ಲಿ ಈ ಸಾಕ್ಷ್ಯ ಚಿತ್ರಗಳನ್ನು ಬೆಂಗಳೂರು ದೂರದರ್ಶನ ಕೇಂದ್ರದಿಂದ 26 ಕಂತುಗಳ ಧಾರಾವಾಹಿಯಾಗಿ ಪ್ರದರ್ಶಿಸಲಾಗಿತ್ತು.

ದಿನಾಂಕ 22–7–2016ರಂದು ಸಮಾರೋಪ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ವಚನ ವಿಹಾರ ಸಂಗೀತಾತ್ಮಕ ಚಿತ್ರಗಳ ನಿರ್ದೇಶಕರೂ ಹಾಗೂ ಖ್ಯಾತ ಚಲನ ಚಿತ್ರ ನಿರ್ದೇಶಕರಾದ ಶ್ರೀ ವೀರಪ್ಪ ಮರಳವಾಡಿಯವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಮೊದಲಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ, ಪಿ.ವಿ. ನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿದರು. ಶ್ರೀ ವೀರಪ್ಪ ಮರಳವಾಡಿಯವರು ಇಂತಹ ಸಾಕ್ಷ್ಯ ಚಿತ್ರ ನಿರ್ಮಾಣ ಮಾಡುವಲ್ಲಿ ತಮಗೆ ಲಭಿಸಿದ ಅನುಭವಗಳನ್ನು ಹಂಚಿಕೊಂಡರು.ಈ ಕಾರ್ಯಕ್ರಮ ತುಂಬ ಚೆನ್ನಾಗಿ ಮೂಡಿ ಬಂದಿತು ಎಂದು ಪ್ರೇಕ್ಷಕರು ಅಭಿನಂದನೆಗಳನ್ನು ಸಲ್ಲಿಸಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ್ ವಂದನಾರ್ಪಣೆ ಮಾಡಿದರು. ಈ ಕಾರ್ಯಕ್ರಮ ಮಾಲೆಯ ಕೊನೆಯ ಸಾಕ್ಷ್ಯಚಿತ್ರವನ್ನು ಅಂದು ಪ್ರದರ್ಶಿಸಲಾಯಿತು.



## ಗಮಕ ವಾಹಿನಿ ಕಾರ್ಯಕ್ರಮ ಮಾಲೆ –6

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಜಂಟಿಯಾಗಿ ಆಯೋಜಿಸುತ್ತಿರುವ ಗಮಕವಾಹಿನಿ ಮಾಲೆ–6ರ ಕಾರ್ಯಕ್ರಮ ದಿನಾಂಕ 3–8–2016ರಂದು ಬಿ.ಎಂ.ಶ್ರೀ ಸಭಾಂಗಣದಲ್ಲಿ ನೆರವೇರಿತು.

ಚೈತನ್ಯ, ನಿರೀಕ್ಷಾ, ಭಾವನಾ, ಅದಿತಿ, ಮೇಘನಾ ಹಾಗೂ ಅಖಿಲಾ ಅವರುಗಳುಮೈ. ಶೇ. ಅನಂತಪದ್ಮನಾಭ ರಾಯರ ಕೃತಿ " ಶ್ರೀಕೃಷ್ಣ ಜನನ"ಪ್ರಸಂಗವನ್ನು ಗಮಕರೂಪದಲ್ಲಿ ನಡೆಸಿಕೊಟ್ಟರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ –

ಸಾಕ್ಷ್ಯ ಚಿತ್ರಗಳ ಪ್ರದರ್ಶನದಲ್ಲಿ 08–08–2016ರಂದು ಕರ್ನಾಟಕದಲ್ಲಿ ಶ್ರೀವೈಷ್ಣವ ಪರಂಪರೆ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.




## ಅಕ್ಕರಗೊಟ್ಟಿ

ದಿನಾಂಕ 16–8–2016ರಂದು ನಡೆದ 'ಅಕ್ಕರಗೊಟ್ಟಿ' ಕಾರ್ಯಕ್ರಮದಲ್ಲಿ, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿದೇವಿ ಕಾಲೇಜಿನ ಕನ್ನಡ ಸ್ನಾತಕೋತ್ತರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿರುವ ಡಾ॥ ಬಿ.ಎ.ಅನ್ನದಾನೇಶ್ ಅವರು ಡಾ॥ಗಿರೀಶ್ ಕಾರ್ನಾಡರ 'ಅಗ್ನಿ ಮತ್ತು ಮಳೆ' ನಾಟಕದ ಒಂದು ಸಾಂಸ್ಕೃತಿಕ ಸಮಸ್ಯೆ ಎಂಬ ವಿಷಯವನ್ನು ಕುರಿತು ಮಾತನಾಡುತ್ತ ಚರ್ಚೆಗೆ ಚಾಲನೆ ನೀಡಿದರು. ಕಾರ್ನಾಡರು ಪೌರಾಣಿಕ ವಿಷಯಗಳನ್ನೊಳಗೊಂಡ ನಾಟಕಗಳನ್ನೇ ವಿಶೇಷವಾಗಿ ರಚಿಸಿದಾರೆ. ಅವರ ಬಹುತೇಕ ನಾಟಕಗಳು ಇಂಗ್ಲೀಷಿಗೆ ಅನುವಾದವಾಗಿವೆ, ಪಠ್ಯ ಪುಸ್ತಕಗಳಾಗಿವೆ, ರಂಗದೃಷ್ಟಿಯನ್ನು ಇಟ್ಟುಕೊಂಡೇ ಅವರ ನಾಟಕಗಳು ರಚನೆಯಾಗಿವೆ. ಒಟ್ಟಾರೆ ಅವರು ಕನ್ನಡ ನಾಟಕಗಳನ್ನು ರಚಿಸಿದರೂ ಕನ್ನಡ ಜನತೆಯಲ್ಲಿ ಒಂದಾದಂತೆ ಕಂಡುಬರುವುದಿಲ್ಲ ಎಂಬ ಅಭಿಪ್ರಾಯವನ್ನು ಅನ್ನದಾನೇಶ್ ವ್ಯಕ್ತ ಪಡಿಸಿದರು. ಚರ್ಚೆಯಲ್ಲಿ ಡಾ॥ಪಿ.ವಿ.ನಾರಾಯಣ, ಪ್ರೊ. ಜಿ. ಅಬ್ದುಲ್ ಬಷೀರ್ ಮುಂತಾದವರು ಭಾಗವಹಿಸಿದರು. ಚರ್ಚೆ ಅರ್ಥ ಪೂರ್ಣವಾಗಿ ನಡೆಯಿತು.

ಇತ್ತೀಚೆಗೆ ನಿಧನರಾದ ಶ್ರೀ ಸಂಕೇತ್ ಕಾಶಿ ಅವರ ನೆನಪಿನಲ್ಲಿ ಈ ಚಲನ ಚಿತ್ರವನ್ನು ಪ್ರದರ್ಶಿಸಲಾಗುತ್ತಿದೆ.

## ಉಲ್ಟಾ ಪಲ್ಟಾ (1997)




ಷೇಕ್ಸ್ ಪಿಯರ್ ಅವರ 'ದಿ ಕಾಮಿಡಿ ಆಫ್ ಎರರ್' ಕೃತಿಯನ್ನು ಕನ್ನಡಕ್ಕೆ ಅಳವಡಿಸಿದ ಪ್ರಯತ್ನ.ಶ್ರೀಮಂತನೊಬ್ಬನ ಮಗ ತನ್ನ ಅಂತ್ಯಕಾಲದಲ್ಲಿ ತನಗೆ ಇನ್ನೊಬ್ಬ ಮಗನಿರುವ ವಿಷಯವನ್ನು ತಿಳಿಸುತ್ತಾನೆ. ಅವನ ಸೇವಕನಿಗೂ ಸೋದರನಿರುವುದು ಅದರಿಂದ ತಿಳಿದು ಬರುತ್ತದೆ.ಆದರೆ ಅವರು ಎಲ್ಲಿದ್ದಾರೆ ಎನ್ನುವುದು ತಿಳಿಯುವುದಿಲ್ಲ. ಹೀಗಾಗಿ ಮಗ ಮತ್ತು ಸೇವಕ ಇಬ್ಬರೂ ತಮ್ಮ ಸೋದರರನ್ನು ಹುಡುಕಿಕೊಂಡು ಊರೂರು ಹುಡುಕುತ್ತಾರೆ.ಅವರು ಸೋದರಿರುವ ಊರಿಗೆ ಬಂದಾಗಿನಿಂದ ಕಥೆ ಆರಂಭವಾಗುತ್ತದೆ.ಈ ಸೋದರ ಊರಿನ ಗಣ್ಯ ವ್ಯಕ್ತಿ ಚುನಾವಣೆಗೆ ನಿಲ್ಲಲು ಸಿದ್ಧನಾಗಿದ್ದಾನೆ. ಅವನ ದಾಂಪತ್ಯದಲ್ಲಿ ಬಿರುಕು ಉಂಟಾಗಿದೆ. ಇನ್ನೊಬ್ಬ ಚೆಲುವೆಯತ್ತ ಅವನು ಆಕರ್ಷಿತನಾಗಿದ್ದಾನೆ. ಈ ಗೊಂದಲದಲ್ಲಿಯೇ ಹುಡುಕಿಕೊಂಡ ಬಂದ ಜೋಡಿಗಳ ಪ್ರವೇಶವಾಗುತ್ತದೆ.ಒಂದೇ ರೂಪಿನ ಎರಡು ಜೋಡಿಗಳು ಅದಲು ಬದಲಾಗುವುದರಿಂದ ಉಂಟಾಗುವ ಗೊಂದಲಗಳೇ ಚಿತ್ರದ ಜೀವಾಳ. ಹಾಸ್ಯದ ನೆಲೆಯಲ್ಲಿ ಚಿತ್ರ ಸಾಗಿದರೂ ಜೀವನ ಅನೇಕ ಮುಖ್ಯ ತಾತ್ವಿಕತೆಯ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಮಾಡುತ್ತದೆ.

## ಕಿರು ಪರಿಚಯ
### ಎನ್.ಎಸ್.ಶಂಕರ್



ಪತ್ರಕರ್ತರಾಗಿ, ಅನುವಾದಕರಾಗಿ ಹೆಸರು ಮಾಡಿರುವ ಎನ್. ಎಸ್.ಶಂಕರ್ ಹೆಸರು ಮಾಡಿದ್ದು ಲಂಕೇಶ್ ಪತ್ರಿಕೆಯಲ್ಲಿನ ತಮ್ಮ ವೈವಿಧ್ಯಮಯ ಬರಹಗಳಿಂದ ಜಾಗತಿಕ ಚಿತ್ರರಂಗದ ಕುರಿತು ಗಂಭೀರ ಅಧ್ಯಯನ ಮಾಡಿರುವ ಅನೇಕ ಜಗತ್ತಿನ ಪ್ರಮುಖ ನಿರ್ದೇಶಕರ ಕುರಿತು, ಮೈಲುಗಲ್ಲಾದ ಚಿತ್ರಗಳ ಕುರಿತು, ಸಿನಿಮಾ ಚಿಂತನೆಯ ಕುರಿತು ಬೆಳಕು ಚೆಲ್ಲುವ ಬರಹಗಳನ್ನು ಬರೆದಿದ್ದಾರೆ. ಚಿನುವಾ ಅಚಬೆಯವರ ಸಮರ್ಥ ಅನುವಾದಕರಾಗಿ ಕೂಡ ಅವರು ಹೆಸರನ್ನು ಮಾಡಿದ್ದಾರೆ. ಅಭಿವೃದ್ಧಿ ಪತ್ರಿಕೋದ್ಯಮದಲ್ಲಿ ಕೂಡ ಅವರದು ಪ್ರಮುಖ ಪಾತ್ರ. 2015ನೇ ಸಾಲಿಗೆ ಮಾಧ್ಯಮ ಅಕಾಡಮಿಯ ಗೌರವ ಪ್ರಶಸ್ತಿ ಅವರಿಗೆ ದೊರೆತಿದೆ.'ಉಲ್ಟಾ ಪಲ್ಟಾ" ಅವರು ನಿರ್ದೇಶಿಸಿದ ಮೊದಲ ಚಿತ್ರ. ರಾಂಗ್ ನಂಬರ್(203), ಜೂಟಾಟ(2005) ಚಿತ್ರಗಳನ್ನು ಅವರು ನಿರ್ದೇಶಿಸಿದ್ದಾರೆ. ಇಂದ್ರಧನುಷ್, ಜಾನಿ ಮೇರಾ ನಾಮ್ ಚಿತ್ರದ ಸಾಹಿತ್ಯವನ್ನು ಕೂಡ ಅವರು ರಚಿಸಿದ್ದಾರೆ. 'ಉಲ್ಟಾ ಪಲ್ಟಾ' ಚಿತ್ರಕ್ಕಾಗಿ ಎನ್.ಎಸ್.ಶಂಕರ್ ಅವರಿಗೆ ಅತ್ಯುತ್ತಮ ಸಂಭಾಷಣೆಕಾರ ರಾಜ್ಯ ಪ್ರಶಸ್ತಿ ದೊರೆತಿದೆ.

## ಕಿರು ಪರಿಚಯ
### ಶ್ರೀ ರಮೇಶ್ ಅರವಿಂದ್



**ಜನನ :** ಸೆಪ್ಟೆಂಬರ್ 10, 1964

**ವಿದ್ಯಾರ್ಹತೆ :** ಬಿ.ಇ.

**ನಟನೆ ಪ್ರಾರಂಭ :**
ಕಾಲೇಜು ದಿನಗಳಿಂದ

**ಪ್ರಥಮ ಚಲನಚಿತ್ರ :**
ಸುಂದರ ಸ್ವಪ್ನಗಳು (ನಿರ್ದೇಶನ: ಕೆ. ಬಾಲಚಂದರ್)

**ಚಲನಚಿತ್ರ ಚಟುವಟಿಕೆಗಳು :**
150 ಚಲನಚಿತ್ರಗಳಲ್ಲಿ ನಟನೆ, 6 ಚಲನಚಿತ್ರಗಳ ನಿರ್ದೇಶಕ, 6 ಚಲನಚಿತ್ರಗಳ ಚಿತ್ರ ಕಥೆ ರಚನೆಕಾರ, 3 ಜನಪ್ರಿಯ ಟಿವಿ ಕಾರ್ಯಕ್ರಮಗಳ ನಿರೂಪಕ ಹಾಗೂ ಎರಡು ಪುಸ್ತಕಗಳ ಲೇಖಕ

**ಬಹುಭಾಷಾ ತಾರೆ :** ಕನ್ನಡ, ತಮಿಳು, ಹಿಂದಿ, ತೆಲುಗು, ಮಲಯಾಳಂ ಭಾಷೆಗಳ ಚಲನಚಿತ್ರಗಳಲ್ಲಿ ನಟಿಸಿರುತ್ತಾರೆ

**ಪ್ರಮುಖ ಚಲನಚಿತ್ರಗಳು :**
ಅಮೇರಿಕಾ ಅಮೇರಿಕಾ, ಉಲ್ಟಾಪಲ್ಟಾ, ನಮ್ಮೂರ ಮಂದಾರ ಹೂವೇ

**ಪ್ರಶಸ್ತಿಗಳು :**
ಉತ್ತಮ ನಟನೆ, ಉತ್ತಮ ಚಿತ್ರಕಥೆ, ಉತ್ತಮ ನಿರ್ದೇಶನಗಳಿಗಾಗಿ ಕರ್ನಾಟಕ ರಾಜ್ಯ ಸರ್ಕಾರ, ಉದಯ ಟಿವಿ, ಫಿಲ್ಮ್ ಫೇರ್ ಹಾಗೂ ಹಲವಾರು ಪ್ರಶಸ್ತಿಗಳು

**ಇತರ ಚಟುವಟಿಕೆಗಳು :**
ಸಿಎಂಸಿಎ, ಡಿಗ್ನಿಟಿ ಫೌಂಡೇಶನ್, ಚುನಾವಣಾ ಆಯೋಗಗಳಿಗೆ ಬ್ರ್ಯಾಂಡ್ ರಾಯಭಾರಿ ಹಾಗೂ ಹಲವಾರು ಅರಿವು ಮೂಡಿಸುವ ಕಾರ್ಯಕ್ರಮಗಳಲ್ಲಿ ಭಾಗವಹಿಕೆ

## ಶ್ರದ್ಧಾಂಜಲಿ
### ಸಂಕೇತ್ ಕಾಶಿ (1954 – 2016)

ಶಂಕರ್ ನಾಗ್ ಅವರ ಗರಡಿಯಲ್ಲಿ ಪಳಗಿದ ಕಾಶಿ ಅವರ ನಿಜವಾದ ಹೆಸರು ಕಾಶಿನಾಥ್ ಚಿಂದಪುರ್ಗಿ. ಸಂಕೇತ್ ತಂಡದಲ್ಲಿ ಅಭಿನಯಿಸಿ ಹೆಸರು ಮಾಡಿದ ಕಾರಣದಿಂದ ಅವರಿಗೆ 'ಸಂಕೇತ್ ಕಾಶಿ' ಎನ್ನುವ ಹೆಸರು ಖಾಯಂ ಆಯಿತು. ರಂಗಭೂಮಿಯಲ್ಲಿ ಇಪ್ಪತ್ತು ವರ್ಷಗಳ ಕಾಲ ವೈವಿಧ್ಯಮಯ ಪಾತ್ರಗಳನ್ನು ಅಭಿನಯಿಸಿದ ಅವರು 'ಪಂಚಮ ವೇದ' ಚಿತ್ರದ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದರು. 'ನನ್ ಹೆಂಡ್ತಿ ಚೆನ್ನಾಗಿದ್ದಾಳೆ' ಚಿತ್ರದ ಮೂಲಕ ನಾಯಕ ನಟರಾದರು. "ನಮ್ಮೂರ ಮಂದಾರ ಹೂವೆ" ಸೇರಿದಂತೆ 139 ಚಲನ ಚಿತ್ರಗಳಲ್ಲಿ ಅಭಿನಯಿಸಿದ್ದ ಅವರಿಗೆ 'ಉಲ್ಟ ಪಲ್ಟಾ' ಚಿತ್ರಕ್ಕಾಗಿ ತೀರ್ಪುಗಾರರ ವಿಶೇಷ ಪ್ರಶಸ್ತಿ ಲಭಿಸಿತ್ತು. ಶಂಕರ್ ನಾಗ್ ಅವರ ಪ್ರಸಿದ್ಧ ಕಿರುತೆರೆ ಧಾರಾವಾಹಿ 'ಮಾಲ್ಗುಡಿ ಡೇಸ್'ನಲ್ಲಿ ಕಾಶಿ ಸಹ–ನಿರ್ದೇಶಕರಾಗಿದ್ದರು. 06–08–2016ರಂದು ಅವರು ನಮ್ಮನ್ನು ತಮ್ಮ ಕಿರು ವಯಸ್ಸಿನಲ್ಲೇ ಅಗಲಿದರು.



## ಅಭಿನಂದನೆಗಳು

# ಶ್ರೀಮತಿ ಎಸ್.ರಮಾದೇವಿ ವಿಶ್ವೇಶ್ವರಯ್ಯ ಅವರಿಗೆ ಕನ್ನಡ ಮಾಣಿಕ್ಯ ವಾರ್ಷಿಕ ಪ್ರಶಸ್ತಿ




ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಕ್ರಿಯ ಸದಸ್ಯೆ ಉತ್ತಮ ಗಾಯಕಿ ಹಾಗೂ ಸಾಹಿತಿ ಶ್ರೀಮತಿ ಎಸ್. ರಮಾದೇವಿ ವಿಶ್ವೇಶ್ವರಯ್ಯ ಅವರಿಗೆ ಡಾ॥ ವಿಷ್ಣುಸೇನಾ ಸಮಿತಿ ಕೊಡಮಾಡುವ 2016ರ ಕನ್ನಡ ಮಾಣಿಕ್ಯ ವಾರ್ಷಿಕ ಪ್ರಶಸ್ತಿ ಲಭ್ಯವಾಗಿರುತ್ತದೆ ಅವರಿಗೆ ಹೊಂಗನಸು ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಶ್ರೀಮತಿ ಎಸ್. ರಮಾದೇವಿ ವಿಶ್ವೇಶ್ವರಯ್ಯ ಅವರು ಸೇಂಟ್ ಜೋಸೆಫ್ ಸಂಜೆ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತಿಯನ್ನು ಹೊಂದಿದ್ದಾರೆ. ಕನ್ನಡಭಾಷೆ ಮತ್ತು ಸಾಂಸ್ಕೃತಿಕ ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.ಆದ್ದರಿಂದ ಅವರಿಗೆ ಚಳುವಳಿ ರಮಾದೇವಿಯೆಂದು ಕರೆಯಲಾಗುತ್ತದೆ. ಇತ್ತೀಚೆಗೆ ನಡೆದ ಕನ್ನಡ ಶಾಸ್ತ್ರೀಯ ಭಾಷೆಯ ಹೋರಾಟದಲ್ಲಿ ಹಿರಿಯ ಸಾಹಿತಿಗಳಾದ ದೇ.ಜ.ಗೌ, ಚಿ.ಮೂ, ಎಲ್.ಎಸ್.ಎಸ್. ಮುಂತಾದವರೊಡನೆ ಸತ್ಯಾಗ್ರಹದಲ್ಲಿ ಭಾಗವಹಿಸಿ, 1–11–2014ರಲ್ಲಿ ಅಮೇರಿಕಾದ ಶ್ವೇತಭವನದ ಎದುರು ಕನ್ನಡ ಬಾವುಟವನ್ನು ಹಾರಿಸಿ ಸಾಗರದಾಚೆಗೂ ಕನ್ನಡದ ಕೀರ್ತಿ ಪತಾಕೆಯನ್ನು ಹಾರಿಸಿದ್ದಾರೆ.

1998ರಲ್ಲಿ ಕನ್ನಡ ಸಂಘರ್ಷ ಸಮಿತಿಯಿಂದ ವಿಶ್ವೇಶ್ವರಯ್ಯ, ಆರ್ಯಭಟ, ಕೆಂಪೇಗೌಡ, ಡಾ ವಿಷ್ಣು ಸೇನಾ ಸಮಿತಿ ಮುಂತಾದ ಅನೇಕ ಸಂಘ ಸಂಸ್ಥೆಗಳಿಂದ ಇವರಿಗೆ ಹಲವಾರು ಪ್ರಶಸ್ತಿಗಳು ಬಂದಿವೆ.

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

ಕವಡೆ: ಇದು ಸಂಸ್ಕೃತದ 'ಕಪರ್ದ'ಶಬ್ದದ ತದ್ಭವ. ಕವಡೆ ಎಂಬುದು ಒಂದು ಸಣ್ಣ ಸಮುದ್ರ ಪ್ರಾಣಿಯ ಚಿಪ್ಪು. ಇಂಡಿಯಾದಲ್ಲಿ ಹಿಂದೆ ಕವಡೆ ಒಂದು ನಾಣ್ಯವಾಗಿ ಚಲಾವಣೆಯಲ್ಲಿದ್ದುದನ್ನು ಸುಲೇಮಾನ್ ಎಂಬ ಪರ್ಷಿಯನ್ ಪ್ರವಾಸಿ ಬರೆಯುತ್ತಾನೆ. ಈಗಲೂ 'ಕವಡೆಯ ಕಿಮ್ಮತ್ತಿಲ್ಲ" ಎಂಬ ಮಾತನ್ನು ಬಳಸುವುದು ರೂಢಿಯಲ್ಲಿದೆ.ಮಾಯಿದೇವಿ ಅಥವಾ ಮಾಳಚಿ (ಮಹಾಲಕ್ಷ್ಮಿ) ಎಂಬ ದೇವತೆಯ ಭಕ್ತರು ಕೊರಳಲ್ಲಿ ಕವಡೆಯ ಮಾಲೆ ಧರಿಸುತ್ತಿದ್ದರು: ಉರಿಲಿಂಗಪೆದ್ದಿ ಎಂಬ ವಚನಕಾರನ ವಚನವೊಂದರಲ್ಲಿ "ಮಾಯಿರಾಣಿಯೇ ದೈವವೆಂದಾರಾಧಿಸಿದಾತನು ಕೊರಳಿಗೆ ಕವಡೆಯ ಕಟ್ಟಿ ತಲೆಯಲ್ಲಿ ಕೆರಹ ಹೊತ್ತು ಬೇವಿನ ಸೊಪ್ಪನುಟ್ಟು ಲಜ್ಜೆಯ ನೀಗಿದ" ಎಂಬ ಮಾತಿದೆ. ಈ ಸಂಪ್ರದಾಯ ಈಗಲೂ ಕೊಲ್ಲಾಪುರಲಕ್ಷ್ಮೀ ದೇವತೆಯ ಭಕ್ತರಲ್ಲಿದೆಯೆಂಬುದಕ್ಕೆ ಬೇಂದ್ರೆಯವರ 'ಕುರುಡು ಕಾಂಚಾಣ' ಕವನದಲ್ಲಿನ ಚಿತ್ರದ ಭಾಗವಾಗಿ ಬರುವ "ಸಣ್ಣ ಕಂದಮ್ಮಗಳ ಕಣ್ಣಿನ ಕವಡಿಯ ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ" ಎಂಬ ವರ್ಣನೆಯನ್ನು ನೋಡಬಹುದು. ಅಳಗುಳಿ ಮನೆ, ಚೌಕಾಬಾರದಂತಹ ಆಟಗಳಲ್ಲಿ ಕವಡೆಯನ್ನು ಗರ ಹಾಕಲು ಬಳಸುತ್ತಾರೆ. ಜ್ಯೋತಿಷಿಗಳು ಭವಿಷ್ಯದ ಆಗುಹೋಗುಗಳನ್ನು ಲೆಕ್ಕಹಾಕಲು ಈಗಲೂ 'ಕವಡೆಹಾಕು'ತ್ತಾರೆ.

'ಕವಡಿಕೆ' ಎಂದರೂ ಕವಡೆಯೇ. ಇದು ಸಂಸ್ಕೃತದ ಕಪರ್ದಿಕಾ (ಸಣ್ಣ ಕವಡೆ) ಎಂಬ ಶಬ್ದದ ತದ್ಭವರೂಪ. ಈಗ ಕವಡೆ ಎಂಬ ರೂಪ ಹೆಚ್ಚು ಬಳಕೆಯಲ್ಲಿದ್ದರೂ ಹಿಂದಿನ ಕನ್ನಡ ಕಾವ್ಯಗಳಲ್ಲಿ ಕವಡಿಕೆ ಎಂಬ ರೂಪವೇ ಹೆಚ್ಚು ಪ್ರಚಲಿತವಾಗಿತ್ತು. "ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ" ಎಂದು 'ವಡ್ಡಾರಾಧನೆ'ಯಲ್ಲಿ ಬರುತ್ತದೆ. ಇದೇ ರೀತಿಯ ವರ್ಣನೆ ಕವಡೆ ರೂಪದೊಡನೆ 'ಭರತೇಶ ವೈಭವ'ದಲ್ಲಿ ಬರುತ್ತದೆ: "ಹಲ್ಲೆಲ್ಲ ಕವಡೆಯ ಚೀಲವಂ ಕೊಡಹಿದಂತುದಿರ್ದುವು ಧರೆಗೆ. "ಶಾಂತಿನಾಥನ 'ಸುಕುಮಾರ ಚರಿತೆ' ಯಲ್ಲಿ "ಇಂತೊಂದು ಕೋಟಿ ಪೊನ್ನನೊಂದು ಕವಡಿಕೆಯಂ ಕುಡುವಂತೇನುಂ ಅಪೋಹಮಿಲ್ಲದೆ ಕೊಟ್ಟು" ಎಂಬ ವಾಕ್ಯದಲ್ಲಿ 'ಕವಡಿಕೆ' ಒಂದು ನಾಣ್ಯದ ರೂಪದಲ್ಲಿ ಬಳಕೆಯಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಹಾಗೆಯೇ ಬ್ರಹ್ಮಶಿವನ 'ಸಮಯಪರೀಕ್ಷೆ'ಯಲ್ಲಿ ಬರುವ "ಕವಡಿಕೆಯುಂ ಕಾಚುಂ ಸಲ್ಗುಮೆಹೊನ್ನವೊಲೆಲ್ಲಿಯಾದೊಡಂ" ಎಂಬ ಮಾತಿನಲ್ಲಿ ಅದಕ್ಕಿದ್ದ ಅಲ್ಪಮೌಲ್ಯ ವ್ಯಕ್ತವಾಗುತ್ತದೆ. "ಕವಡಿ ಕೆನೆತ್ತ ಮೊದಲಾದ ನಾಟಕದ ಮೊಗರಂಗವೆನಿಪ ಕವಾಟ ತೆಱೆಯದು" ಎಂಬ ಕುಮಾರವ್ಯಾಸನ ಮಾತಿನಿಂದ ಅದೊಂದು ಬಗೆಯ ಆಟವೆಂಬುದೂ ತಿಳಿಯುತ್ತದೆ. ಕವಡೆಯ ಬೆನ್ನ ಬಣ್ಣದಿಂದ ಅವುಗಳನ್ನು ಐದು ರೀತಿಯಲ್ಲಿ ವಿಂಗಡಿಸುತ್ತಿದ್ದರಂತೆ: ಸುವರ್ಣಛಾಯೆ–ಸಿಂಹಿ, ಧೂಮ್ರವರ್ಣ–ವ್ಯಾಘ್ರಿ, ಹಳದಿ–ಮೃಗಿ, ಬಿಳಿಪು–ಹಂಸಿ ಹಾಗೂ ಉದ್ದವಾದುದು ವಿದಂತ.

=====

ಕಳ್ಳ: ಇದು ದ್ರಾವಿಡ ಪದ; ಕಳ್ ಎಂಬ ಧಾತುವಿಗೆ 'ಅ' ಎಂಬಪ್ರತ್ಯಯಹತ್ತಿ ರೂಪಿತವಾದುದು. ಕಳ್ ಎಂಬ ಧಾತುವಿಗೆ ಅಪಹರಿಸು ಎಂಬ ಅರ್ಥವಿದೆ. ತಮಿಳುಮತ್ತುಮಲಯಾಲಂಗಳಲ್ಲಿ ಕಳ್ಳ ಎಂಬ ರೂಪಲ್ಲಿಯೂ, ತುಳುವಿನಲ್ಲಿ ಕಳುವೆ ಎಂಬ ರೂಪದಲ್ಲಿಯೂ ಈ ಶಬ್ದ ಬಳಕೆಯಲ್ಲಿದೆ. ಕಳ್ಳತನ ಮಾಡುವವನು ಎಂಬುದನ್ನು ಸೂಚಿಸುವ ಈ ಶಬ್ದ ಹಳೆಯದು: "ಎಲ್ಲಮಂ ಕಳ್ಳರ್ ಕೊಂಡುಪೋದರ್" ಎಂಬಪ್ರಯೋಗ'ವಡ್ಡಾರಾಧನೆ'ಯದು. ಇದು ಕಳ ಎಂಬ ರೂಪದಲ್ಲಿಯೂಪ್ರಾಚೀನ ಕಾವ್ಯ–ಶಾಸನಗಳಲ್ಲಿ ದೊರೆಯುತ್ತದೆ. ಇದರ ಭಾವನಾಮರೂಪವೇ ಕಳವು ಅಥವಾ ಕಳ್ಳತನ. ಕಳ್ಳದ ಎಂಬ ರೂಪವೂ ದೊರೆಯುತ್ತದೆ: ಪಂಚಾಣುವ್ರತಗಳಲ್ಲಿ ಒಂದಾದ ಅಸ್ತೇಯವನ್ನು 'ವಡ್ಡಾರಾಧನೆ'ಯು'ಕಳ್ಳದವ್ರತ' ಎನ್ನುತ್ತದೆ. ಕಳ್ಳಕಾಕ ಎಂಬಶಬ್ದವೂ ಇದೆ, 'ಕಳ್ಳನಮಗ' ಅಥವಾ'ಕಳ್ಳನನ್ನಮಗ' ಎಂಬುದು ಒಂದುಸಾಮಾನ್ಯಬೈಗುಳ.

ಕಳ್ಳ ಎಂಬ ವಿಶೇಷಣವು ಮೋಸದ ಎಂಬರ್ಥದಲ್ಲಿ ಬಳಕೆಯಾಗುತ್ತದೆ. ಕಳ್ಳಗಂಡಿ ಎಂದರೆ ಗೊತ್ತಾಗದಂತೆ ಹೋಗಬಹುದಾದ ಕಳ್ಳಬಾಗಿಲು. ಹಾಗೆಯೇ ಕಳ್ಳಜ್ವರ ಎಂಬುದು ನಟನೆಯ ಜ್ವರ ಎಂಬರ್ಥವನ್ನು ಸೂಚಿಸುತ್ತದೆ. ಕಳ್ಳಕಿಂಡಿ ಎಂದರೆ ಕಳ್ಳರು ಹಾಕಿದ ಕನ್ನ ಎಂದು. ಕನ್ನ ಹಾಕಿ ಕದಿಯುವವನನ್ನು 'ಸುಕುಮಾರಚರಿತೆ'ಯಲ್ಲಿ ಕನ್ನಗಳ್ಳ ಎಂದು ಕರೆದಿದೆ. ಕದ್ದಿರುವ ವಸ್ತುವನ್ನು ಕಳ್ಳಮಾಲು ಎನ್ನುವುದು ಸಾಮಾನ್ಯ.ಅನಧಿಕೃತ ಮಾರಾಟ ಮಾಡುವ ಜಾಗವೇ ಕಳ್ಳಪೇಟೆ ಅಥವಾ ಕಳ್ಳಸಂತೆ. ಕೆಲವೆಡೆ ಕಳ್ಳಕುಪ್ಪಸ ಎಂಬ ಮಾತನ್ನು ಬಳಸುತ್ತಾರೆ: ಮೊದಲ ಸಲ ಬಸಿರಿಯಾದ ಮಗಳಿಗೆ ತವರಿನವರು ಗುಟ್ಟಾಗಿ ಕುಪ್ಪಸ ಕೊಡುವ ಶಾಸ್ತ್ರವನ್ನಿದು ಸೂಚಿಸುತ್ತದೆ.

ಅಧಿಕೃತವಲ್ಲದ ನಾಣ್ಯಗಳನ್ನು ಹಿಂದಿನ ಕಾವ್ಯಗಳು ಕಳ್ಳವಣ ಎಂದು ಕರೆಯುತ್ತವೆ. ಬಸವಣ್ಣನ ಒಂದು ವಚನದಲ್ಲಿ "ಕಳ್ಳ ನಾಣ್ಯ ಸಲುಗೆಗೆ ಸಲ್ಲದು" ಎಂಬ ವಾಕ್ಯವಿದೆ. ದ್ರಮ್ಮ ಎಂಬುದು ಹಿಂದೆ ಪ್ರಚಲಿತವಿದ್ದ ಒಂದು ನಾಣ್ಯ. ಒಂದು ವಚನದಲ್ಲಿ "ಹಾದರಕ್ಕೆ ಹೋದರೆ ಕಳ್ಳದ್ರಮ್ಮವಾಯಿತ್ತು" ಎಂಬ ಮಾತಿದೆ. ದ್ರಮ್ಮ ಎಂಬ ನಿರ್ದಿಷ್ಟನಾಣ್ಯದ ಅನಧಿಕೃತ ರೂಪವನ್ನಿದು ಸೂಚಿಸುತ್ತದೆ.

## ಶ್ರೀಮತಿ ಸಾವಿತ್ರಮ್ಮ– ಪ್ರೊ॥ ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ

ಬಿಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸ್ಥಾಪಕರೂ, ಹೊಸಗನ್ನಡದ ಹೆಸರಾಂತ ಸಂಶೋಧಕರೂ ಕವಿಗಳೂ ವಿಮರ್ಶಕರೂ ಆದ ದಿವಂಗತ ಪ್ರೊ॥ಎಂ.ವಿ.ಸೀತಾರಾಮಯ್ಯ ಅವರ ಸಹಧರ್ಮಿಣಿಯವರು ಶ್ರೀಮತಿ ಸಾವಿತ್ರಮ್ಮ, ಅವರ ಮಕ್ಕಳಾದ ಶ್ರೀ ಎಂ.ಎಸ್. ಭಾಸ್ಕರ್, ಶ್ರೀ ಎಂ.ಎಸ್. ರಾಮಪ್ರಸಾದ್, ಶ್ರೀ ಎಸ್.ಟಿ. ರಾಧಾಕೃಷ್ಣ ಮತ್ತು ಶ್ರೀ ಎಂ.ಎಸ್. ಶೇಷಾದ್ರಿನಾಥ್ ಅವರು 'ಶ್ರೀಮತಿ ಸಾವಿತ್ರಮ್ಮ– ಪ್ರೊ॥ಎಂ.ವಿ.ಸೀ. ಸಾಹಿತ್ಯ ಪುರಸ್ಕಾರವನ್ನು" ಪ್ರತಿವರ್ಷ ನೀಡಲು ಐದು ಲಕ್ಷ ರೂಪಾಯಿಗಳ ದತ್ತಿಯೊಂದನ್ನು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಕೊಡುಗೆಯನ್ನು ನೀಡಿರುವ ಸಾಹಿತಿಯೊಬ್ಬರಿಗೆ ನೀಡುವ ಮೂವತ್ತು ಸಾವಿರ ರೂಪಾಯಿ ನಗದು ಮತ್ತು ಫಲಕವನ್ನೊಳಗೊಂಡ ಪುರಸ್ಕಾರವಿದು.

ಶ್ರೀಮತಿ ಸಾವಿತ್ರಮ್ಮ – ಈ ಸಾಹಿತ್ಯ ಪುರಸ್ಕಾರಕ್ಕೆ ಈ ವರ್ಷ ಶ್ರೀ ವಿ.ಕೃಷ್ಣ ಅವರು ಆಯ್ಕೆಯಾಗಿದ್ದಾರೆ. ಪ್ರೊ.ಶಾಂತರಾಜು, ಕನ್ನಡ ಪ್ರಾಧ್ಯಾಪಕರು, ವಿಜಯ ಸಂಜೆ ಕಾಲೇಜು, ಬೆಂಗಳೂರು ಹಾಗೂ ಡಾ॥ ಶ್ರೀಪಾದ ಭಟ್, ಸಹಾಯಕ ಪ್ರಾಧ್ಯಾಪಕರು, ಡಿ.ವಿ.ಜಿ. ಕನ್ನಡ ಅಧ್ಯಯನ ಕೇಂದ್ರ, ತುಮಕೂರು ವಿಶ್ವವಿದ್ಯಾನಿಲಯ ಅವರನ್ನೊಳಗೊಂಡ ಹಿರಿಯ ವಿಮರ್ಶಕ– ವಿದ್ವಾಂಸರ ಸಮಿತಿಯು ಈ ವರ್ಷದ ಪುರಸ್ಕಾರಕ್ಕೆ ಶ್ರೀ ವಿ.ಕೃಷ್ಣ ಅವರನ್ನು ಆಯ್ಕೆ ಮಾಡಿದೆ.

* * *

### ಅಭಿನಂದನೆಗಳು

## ಶ್ರೀ ವಿ. ಕೃಷ್ಣ



ಶ್ರೀ ವಿ. ಕೃಷ್ಣ ಅವರು 19–12–1950ರಂದು ಬೆಂಗಳೂರಿನಲ್ಲಿ ಜನಿಸಿದರು. ಶ್ರೀಯುತರು ವಿವಿಧ ಕಂಪೆನಿಗಳಲ್ಲಿ ದುಡಿಯುತ್ತ ಅಪೂರ್ವವಾದ ಕನ್ನಡದ ಕೆಲಸಗಳನ್ನು ಮಾಡುತ್ತಿದ್ದಾರೆ. ಶ್ರೀಯುತರು ಭಾರತೀಯ ಕೃಷಿ ಸಂಶೋಧನ ಸಂಸ್ಥೆ ಹಾಗೂ ಹಲವಾರು ಸಂಸ್ಥೆಗಳಲ್ಲಿ ಮತ್ತು ಕಂಪೆನಿಗಳಲ್ಲಿ ವಿವಿಧ ಹಂತಗಳಲ್ಲಿ ವೈವಿಧ್ಯಮಯವೂ ಅಪೂರ್ವವೂ ಆದ ಸೇವೆಯನ್ನು ಸಲ್ಲಿಸಿದ್ದಾರೆ. ಈ ಸೇವೆಯ ನಡುವೆ ವಿಶೇಷವಾದ ಸಾಹಿತ್ಯಸೇವೆಯನ್ನು ಮಾಡಿರುವುದು ಸಂತೋಷದ ಸಂಗತಿಯಾಗಿದೆ.

ಶ್ರೀ ವಿ.ಕೃಷ್ಣ ಅವರು ಸಂಪಾದಿಸಿರುವ ಕನಕದಾಸರ ಕೃತಿ ಸಂಪುಟವನ್ನು ಮಂಗಳೂರು ವಿಶ್ವವಿದ್ಯಾಲಯ ಪ್ರಕಟಿಸಿದೆ. ಪ್ರೊ. ಜಿ.ಎಸ್.ದೀಕ್ಷಿತ್ ಅವರ ಕೃತಿಗಳನ್ನು ಸಂಪಾದಿಸಿದ್ದಾರೆ. ಕುವೆಂಪು ಭಾಷಾ ಭಾರತಿಗಾಗಿ ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದ ಮಾಡುವ ಕಾರ್ಯದಲ್ಲಿ ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. ಶ್ರೀ ವಿ.ಕೃಷ್ಣ ಅವರು ರಚಿಸಿರುವ ಕರ್ನಾಟಕ ಸಾಹಿತ್ಯ ಪರಿಷತ್ತು ಹೊರ ತಂದಿರುವ 'ಕನ್ನಡ ಇಂಗ್ಲೀಷ್' ನಿಘಂಟುಗಳ 750 ಪುಟಗಳನ್ನೊಳಗೊಂಡಿದೆ. ಇದರಲ್ಲಿ 1,60,000 ಶಬ್ದಗಳಿಗೆ ಅರ್ಥನೀಡಲಾಗಿದೆ. ಶ್ರೀಯುತರು ಸದ್ಯಕ್ಕೆ ಕುಮಾರ ವ್ಯಾಸ ಭಾರತದ ಸಂಪಾದನಾ ಕಾರ್ಯದಲ್ಲಿ ತೊಡಗಿದ್ದಾರೆ.

## ರಾಜೀನಾಮೆ

2011ರಿಂದ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದ ಡಾ.ಕೆ ಆರ್ ಗಣೇಶ್ ಅವರು ಇದೀಗ ಇನ್ನೊಂದು ಸಂಸ್ಥೆಯ ಮುಖ್ಯಸ್ಥರಾಗಿ ಆಯ್ಕೆಗೊಂಡಿದ್ದು ಆ ಸಂಸ್ಥೆಯ ನಿಯಮಗಳಂತೆ ಬೇರೆ ಯಾವುದೇ ಸಂಸ್ಥೆಯ ಆಡಳಿತ ಮಂಡಲಿ ಜವಾಬ್ದಾರಿಗಳು ಹೊಂದಿರಬಾರದು ಎಂಬ ನಿಯಮವನ್ನು ಪಾಲಿಸಲು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯತ್ವ ಸ್ಥಾನಕ್ಕೆ ರಾಜೀನಾಮೆ ನೀಡಿರುತ್ತಾರೆ. ಅವರು ಈ ಅವಧಿಯನ್ನೂ ಒಳಗೊಂಡಂತೆ ದೀರ್ಘಕಾಲದಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಭಾಗವಹಿಸಿದ್ದು ಪ್ರತಿಷ್ಠಾನ ನಡೆಸಿದ ತರಗತಿಗಳಲ್ಲಿ ಪಾಠಗಳನ್ನೂ ಮಾಡಿರುತ್ತಾರೆ. ಅವರ ಬೆಂಬಲದಿಂದ ಪ್ರತಿಷ್ಠಾನದ ಶಾಶ್ವತ ನಿಧಿಗೆ ಧನಸಹಾಯವೂ ದೊರಕಿರುತ್ತದೆ. ಅವರಿಗೆ ಹೊಂಗನಸು ಅಭಿನಂದಿಸುತ್ತದೆ ಹಾಗೂ ಅವರಿಗೆ ಆಭಾರಿಯಾಗಿರುತ್ತದೆ.

### ಅಭಿನಂದನೆಗಳು

## ಶ್ರೀ ಡೀ.ನಂ. ವೆಂಕಟರಮಣಯ್ಯ



ಭಾರತದ ಕೆಲವು ಭಾಷೆಗಳಿಗೆ ಶಾಸ್ತ್ರೀಯ ಸ್ಥಾನಮಾನಗಳು ದೊರಕಿತ್ತಿದ್ದವು. ಆದರೆ ಕನ್ನಡಕ್ಕೆ ದೊರೆತಿರಲಿಲ್ಲ. ಕಾನೂನಿನ ಅಡ್ಡಿ ಆತಂಕಗಳು ನಿವಾರಣಯಾಗಿ ಚೈನ್ನೈನ ಉಚ್ಛನ್ಯಾಯಾಲಯದ ನಿರ್ಣಯದ ಮೂಲಕ ಕನ್ನಡಕ್ಕೂ ಇತ್ತೀಚೆಗೆ ಶಾಸ್ತ್ರೀಯ ಸ್ಥಾನಮಾನಗಳು ಲಭಿಸಿದವು. ಒಂದು ಸಂಸ್ಥೆ–ಹಲವಾರು ವ್ಯಕ್ತಿಗಳ ಸಂಘಟನೆಯಿಂದ ಸಾಧ್ಯವಾಗಬಹುದಾದ ಆಗಾಧ ಕಾರ್ಯವನ್ನು ಸನ್ಮಾನ್ಯ ಶ್ರೀ ಡಿ.ನಂ. ವೆಂಕಟರಮಣಯ್ಯ ಒಬ್ಬರೇ ಕಾನೂನಿನ ಹೋರಾಟದ ಮೂಲಕ ಜಯ ಸಾಧಿಸುವುದರ ಮುಖಾಂತರ ತೋರಿಸಿಕೊಟ್ಟಿದ್ದಾರೆ. ವೆಂಕಟರಮಣಯ್ಯ ಅವರು ಹೈಕೋರ್ಟಿನಲ್ಲಿ ಸ್ವತಃ ವಾದ ಮಾಡುತ್ತಿದ್ದು ವಾದ ಪ್ರತಿವಾದಗಳಿಗಾಗಿ ಚೈನ್ನೈಗೆ ಹದಿನಾರು ಬಾರಿ ಹೋಗಿ ಬಂದಿರುತ್ತಾರೆ. ಕನ್ನಡದ ಶಾಸ್ತ್ರೀಯ ಸ್ಥಾನಮಾನದ ಬಗ್ಗೆ ಮೊದಲು ತಕರಾರು ಎತ್ತಿದವರು ಚೈನ್ನೆಯ ವಕೀಲರಾದ ಶ್ರೀ ಗಾಂಧಿಯವರು. ಈ ಕಾನೂನು ಹೋರಾಟ ಎಂಟು ವರ್ಷ ನಡೆಯಿತು. ಈ ಸಂದರ್ಭದಲ್ಲಿ ಶ್ರೀ ಮುಖ್ಯಮಂತ್ರಿ ಚಂದ್ರು, ಡಾ॥ಎಲ್. ಹನುಮಂತಯ್ಯ, ಶ್ರೀ ಆರ್.ಎಸ್.ಎನ್. ಗೌಡ, ಶ್ರೀ ತಿರುಮಲೆ ರಂಗಾಚಾರ್ಯ, ಶ್ರೀ ದೀಪಕ್ ತಿಮ್ಮಯ್ಯ, ನ್ಯಾಯವಾದಿಗಳಾದ ಶ್ರೀ ಸಿ.ಎಚ್. ಹನುಮಂತರಾಯ ಅವರು ಕೂಡ ಮದ್ರಾಸ್ ಹೈಕೋರ್ಟ್‌ನಲ್ಲಿ ಕಾನೂನು ಹೋರಾಟ ಮಾಡಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬೇಕು. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ಮಾನ ದೊರಕಲು ಅಹರ್ನಿಶಿ ಶ್ರಮಿಸಿದ ಸನ್ಮಾನ್ಯ ಶ್ರೀ ಡಿ.ನಂ. ವೆಂಕಟರಮಣಯ್ಯನವರಿಗೆ ಹೊಂಗನಸು ಅಭಿನಂದನೆಗಳನ್ನು ಸಲ್ಲಿಸುತ್ತದೆ.

ವೆಂಕಟರಮಣಯ್ಯನವರು ಮೈಸೂರು ಬ್ಯಾಂಕಿನ ನಿವೃತ್ತ ಅಧಿಕಾರಿಗಳು ; ಕನ್ನಡ ಭಾಷಾ ಪ್ರೇಮಿಗಳು ಹಾಗೂ ಸಾಹಿತಿಗಳು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮಾಜಿ ಆಂತರಿಕ ಲೆಕ್ಕ ಪರಿಶೋಧಕರಾಗಿದ್ದ ಅವಧಿಯಲ್ಲಿ ಪ್ರತಿಷ್ಠಾನದ ಲೆಕ್ಕ ವ್ಯವಸ್ಥೆಯನ್ನು ಸದೃಢಗೊಳಿಸಿರುತ್ತಾರೆ. ನೂರಕ್ಕೂ ಹೆಚ್ಚು ಭಾವಗೀತೆಗಳನ್ನು ರಚಿಸಿರುವ ಶ್ರೀಯುತರು ರಾಜಕೀಯ– ಸಾಂಸ್ಕೃತಿಕ– ಸಾಹಿತ್ಯಕ–ವಿಚಾರಗಳನ್ನು ಕುರಿತು ಅನೇಕ ಮೌಲಿಕ ಲೇಖನಗಳನ್ನು ಬರೆದಿದ್ದಾರೆ; ಜನಹಿತ ಕಾರ್ಯಗಳಲ್ಲಿ ತೊಡಗಿರುವ ಶ್ರೀಯುತರು ಅನೇಕ ಸಂಘ ಸಂಸ್ಥೆಗಳ ಸಂಪರ್ಕದಲ್ಲಿದ್ದಾರೆ.

### ಕರ್ನಾಟಕ ಲೋಚನ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನ ಪತ್ರಿಕೆಗೆ ಸಾಹಿತ್ಯ–ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ. ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

## ತ್ರಿವೇಣಿ

ಸೆಪ್ಟಂಬರ್ 1, 1928–ಜುಲೈ 29, 1963

ತ್ರಿವೇಣಿ ಎಂಬ ಬರಹನಾಮದಿಂದ ಪ್ರಸಿದ್ಧರಾದವರು ಶ್ರೀಮತಿ ಅನಸೂಯ ಶಂಕರ್. ಕನ್ನಡದ ಕಣ್ವ ಬಿ.ಎಂ.ಶ್ರೀಯವರ ಸೋದರನ ಪುತ್ರಿ ಇವರು. 1947ರಲ್ಲಿ ಮಹಾರಾಜಾ ಕಾಲೇಜಿನಿಂದ ಮನಃಶಾಸ್ತ್ರದಲ್ಲಿ ಸಿದ್ದೇಗೌಡ ಚಿನ್ನದ ಪದಕದೊಂದಿಗೆ ಬಿ.ಎ. ಪದವಿ ಪಡೆದರು. ಮನಃಶಾಸ್ತ್ರದ ಪದವೀಧರೆ ಯಾದ ತ್ರಿವೇಣಿಯವರ ಅನೇಕ ಕೃತಿಗಳು ಮನಃಶಾಸ್ತ್ರಕ್ಕೆ ಸಂಬಂಧಪಟ್ಟಿರುತ್ತವೆ. ಮನಃಶಾಸ್ತ್ರದ ಅಧ್ಯಯನಕ್ಕೆ ಸಂಬಂಧಪಟ್ಟ ಸನ್ನಿವೇಶಗಳು ಹಾಗೂ ಉದಾಹರಣೆಗಳು ಅವರ ಅನೇಕ ಸಣ್ಣ ಕಥೆಗಳು ಹಾಗೂ ಕಾದಂಬರಿಗಳಲ್ಲಿ ಕಂಡುಬರುತ್ತವೆ. ತ್ರಿವೇಣಿ ಅವರು 25 ಕಾದಂಬರಿಗಳು ಹಾಗೂ 3 ಕಥಾ ಸಂಕಲನಗಳು ರಚಿಸಿದ್ದಾರೆ, ಹೂವುಹಣ್ಣು ಒಳಗೊಂಡಂತೆ ಅವರ ಐದು ಕಾದಂಬರಿಗಳು ಕನ್ನಡದಲ್ಲಿ ಚಲನಚಿತ್ರಗಳಾಗಿವೆ ಹಾಗೂ ಒಂದು ಕಾದಂಬರಿ ಮಲಯಾಳಂನಲ್ಲಿ ಚಲನ ಚಿತ್ರವಾಗಿದೆ. ಇವರು ಕನ್ನಡದ ಪ್ರಮುಖ ಕಾದಂಬರಿಕಾರರಲ್ಲೊಬ್ಬರು. ಹಲವಾರು ಜನಪ್ರಿಯ ಕಾದಂಬರಿಗಳ ಮೂಲಕ ಪ್ರಸಿದ್ಧಿಯಾಗಿದ್ದಾರೆ. ಕನ್ನಡ ಸಾಹಿತ್ಯದ ಪ್ರಮುಖ ಬರಹಗಾರ್ತಿಯಾಗಿ ಗುರುತಿಸಲ್ಪಟ್ಟಿದ್ದಾರೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of Posting :30-08-2016**

## ೨೦೧೬ ಆಗಸ್ಟ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೬ರ ಆಗಸ್ಟ್ ತಿಂಗಳಿನಲ್ಲಿ ೨೧ ಗ್ರಂಥಗಳ ಶುಷ್ಕ ಶುದ್ದೀಕರಣ, ೩೪ ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, ೩೨ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೫ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೧೫ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ. ಒಂದು ಗ್ರಂಥದ ಡಿಜಿಟಲೀಕರಣ ಕಾರ್ಯವು ಮುಗಿದಿದೆ.ಡಿಜಿಟಲೀಕರಣವಾದ ಹದಿನೈದು ಕೃತಿಗಳ ಗರಿಗಳನ್ನು ಎಡಿಟ್ ಮಾಡಿ ಪುಟ ಸಂಖೆ ನೀಡಲಾಗಿದೆ.

ಎ.ಪಿ.ಎಸ್. ಪದವಿ ಕಾಲೇಜಿನ ವಿದ್ಯಾರ್ಥಿಗಳಾದ ರಜನಿ, ಉಮಾ ಮತ್ತು ಲಕ್ಷ್ಮೀ ವಾರದಲ್ಲಿ ೩ ದಿನ ಹಸ್ತಪ್ರತಿ ಸಂರಕ್ಷಣಾ ಕಾರ್ಯದಲ್ಲಿ ಕೈಜೋಡಿಸಿ ೬ಕೃತಿಗಳ ಸಂರಕ್ಷಣೆಗೆ ಕಾರಣರಾಗಿದ್ದಾರೆ.

ಡಾ॥ ಸುಮತೀಂದ್ರನಾಡಿಗ್ ಅವರ ತಂದೆಯವರ ಶ್ರೀ ವೀರಕಂಠೀರವ ಚರಿತ್ರೆ ಎಂಬ ಒಂದು ಶತಮಾನದ ಹಿಂದಿನ ಕೃತಿಯನ್ನು ಸಂಪಾದನೆ ಮಾಡಿ ನೀಡಲಾಗಿದೆ.

## ಗ್ರೀನ್ ಸ್ಟೇಜ್

ಹಿರಿಯ ರಂಗಕರ್ಮಿಗಳಾದ ಎ.ಎಸ್. ಮೂರ್ತಿ, ಮೇಕಪ್ ನಾಣಿ, ಭಾರ್ಗವಿ ನಾರಾಯಣ್ ಅವರುಗಳ ಮಾರ್ಗದರ್ಶನದಲ್ಲಿ ಗ್ರಿನ್ ರೂಂ ಎಂದು ಪ್ರಾರಂಭವಾದ ತಂಡ ಈಗ ಗ್ರೀನ್ ಸ್ಟೇಜ್ ಎಂಬ ಹೆಸರಿನಲ್ಲಿ ಜನಪ್ರಿಯವಾಗಿದೆ. ಇದರ ನೇತೃತ್ವವನ್ನು ಮೆಕಾನಿಕಲ್ ಎಂಜಿನಿಯರಿಂಗ್ ಪದವೀಧರ, ಸ್ವಂತ ಉದ್ಯಮಿ ಶ್ರೀ ಎ. ವಿಜಯ್ ಅವರು ಹೊತ್ತಿದ್ದಾರೆ. ಅವರು ಹವ್ಯಾಸಿ ರಂಗಭೂಮಿ ನಟರಾಗಿ, ಸಂಘಟಕರಾಗಿ, ನಿರ್ದೇಶಕರಾಗಿ ಕಿರುತೆರೆ ಹಾಗೂ ಹಿರಿ ತೆರೆಗಳಲ್ಲಿ ಸಕ್ರಿಯರಾಗಿದ್ದಾರೆ. ಅವರು 7 ರಂಗ ಪ್ರಯೋಗ ನಾಟಕಗಳ, 10 ಬೀದಿ ನಾಟಕಗಳ 300ಕ್ಕೂ ಹೆಚ್ಚು ಪ್ರದರ್ಶನಗಳನ್ನು ನೀಡಿರುತ್ತಾರೆ ಜೊತೆಗೆ ರಂಗಭೂಮಿಯ ಬಗ್ಗೆ ತರಬೇತಿ ಶಿಬಿರಗಳನ್ನು ನಡೆಸಿರುತ್ತಾರೆ. ಇವರ **'ಇದು ನಮ್ಮ ಬೆಂಗಳೂರು'** ಎಂಬ ನಾಟಕ 43ಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿದೆ.

**ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ ಗ್ರೀನ್ ಸ್ಟೇಜ್ ತಂಡವು ಪ್ರತೀ ತಿಂಗಳೂ ಒಂದು ನಾಟಕವನ್ನು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಸಭಾಂಗಣದಲ್ಲಿ ಪ್ರದರ್ಶಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿರುತ್ತದೆ.**

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ)ಆಜೀವ ಚಂದಾ ರೂ. 1500/– ಆಗಿರುತ್ತದೆ.ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..............................................................................

..............................................................................

..............................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭